

# ಕೆಂಪು ಜುಟ್ಟಿನ ಹುಂಜ

ಮಕ್ಕಳ ದಿನದ ಸ್ಪರ್ಧೆಗಳಲ್ಲಿ
ಪ್ರೋತ್ಸಾಹಕ ಬಹುಮಾನ

26. 1. 84

# ಕೆಂಪು ಜುಟ್ಟಿನ ಹುಂಜ

ಹೇಳಿದವರು: ವಿಕ್ತರ್ ವಾಷ್ದಯೆವ್





ರಾದುಗ ಪ್ರಕಾಶನ
ಮಾಸ್ಕೋ

ಒಂದಾನೊಂದು ಕಾಲದಲ್ಲಿ ಇಬ್ಬರು ಪುಟ್ಟ ಅನಾಥ ಮಕ್ಕಳಿದ್ದರು – ಒಬ್ಬ ಹುಡುಗ, ಒಬ್ಬ ಹುಡುಗಿ. ಅವರ ತಾಯಿ ತಂದೆ ತೀರಿಹೋಗಿದ್ದರು, ಆಸ್ತಿಪಾಸ್ತಿ ಏನೂ ಇಲ್ಲದೆ ಒಂದು ಕೆಂಪು ಜುಟ್ಟಿನ ಹುಂಜವನ್ನಷ್ಟೆ ಹಿಂದೆ ಬಿಟ್ಟು ಹೋಗಿದ್ದರು.

ಒಂದು ದಿನ ಮನೆಯಲ್ಲಿ ತಿನ್ನಲು ಒಂದು ಚೂರು ರೊಟ್ಟಿಯೂ ಇರದಿದ್ದಾಗ ಅಣ್ಣ ತಂಗಿಗೆ ಹೇಳಿದ:

"ಹೋಗಿ ನೋಡು, ಕಣಜದಲ್ಲಿ ಏನಾದರೂ ಇದೆಯಾಂತ. ನನಗೆ ತುಂಬ ಹಸಿವಾಗ್ತಾ ಇದೆ!"

ಹುಡುಗಿ ಕಣಜಕ್ಕೆ ಹೋದಳು. ಅದು ಬರಿದಾಗಿತ್ತು. ಕಸಬರಿಕೆಯೊಂದನ್ನು ತೆಗೆದುಕೊಂಡು ತಳವನ್ನೆಲ್ಲ ಗುಡಿಸಿದಳು. ಕೊನೆಗೆ ಒಂದೇ ಒಂದು ಕಾಳು ಗೋಧಿ ಸಿಕ್ಕಿತು.

ಅದನ್ನು ಅಣ್ಣನಿಗೆ ತಂದುಕೊಟ್ಟಳು. ಅವರು ಅದನ್ನು ನೆಡಲು ನಿರ್ಧರಿಸಿದರು.

ಮನೆಯ ಹಿಂದೆ ಅಂಗಳಕ್ಕೆ ಹೋಗಿ ಒಂದು ಪುಟ್ಟ ಕುಳಿ ಮಾಡಿದರು. ಕಾಳನ್ನು ಅದರಲ್ಲಿ ಹಾಕಿ ಮಣ್ಣು ಮುಚ್ಚಿದರು.

ಬೆಳಿಗ್ಗೆ ಎದ್ದೇಟಿಗೇ ಅಣ್ಣ ಹೋಗಿ ನೋಡಿದ. ಅವನಿಗೆ ಏನು ಕಾಣುತ್ತೆ – ಕಾಳು ಮರವಾಗಿ ಬೆಳೆದಿದೆ. ಅದರ ಕಾಂಡ ಪೈನ್ ಮರದ ಕಾಂಡದಷ್ಟು ದಪ್ಪನಾಗಿತ್ತು. ಅದು ಎಷ್ಟು ಎತ್ತರವಾಗಿ ಬೆಳೆದಿದ್ದಿತೆಂದರೆ ಅದರ ತುದಿ ಆಕಾಶವನ್ನು ಮುಟ್ಟಿತ್ತು!

"ಓಹ್, ಅದ್ಭುತ, ಅತ್ಯದ್ಭುತ!" ಅಂದುಕೊಂಡ ಹುಡುಗ. "ಆಗಲಿ, ಇದರ ಮೇಲೆ ಏನಿದೆಯೋ ಹೋಗಿ ನೋಡ್ತೀನಿ!" ಹಾಗೆಂದುಕೊಂಡು ಅವನು ಹತ್ತತೊಡಗಿದ.

ಹತ್ತಿದ, ಹತ್ತಿದ, ಕೊನೆಗೆ ಮೋಡಗಳ ಬಳಿಗೆ ಬಂದ. ಮರದ ಕಾಂಡ ಮೋಡಗಳನ್ನೂ ಭೇದಿಸಿಕೊಂಡು ಇನ್ನೂ ಮೇಲಕ್ಕೆ ಹೋಗಿತ್ತು.

ಅವನು ಅಷ್ಟಕ್ಕೇ ನಿಂತ. ಮೋಡಗಳ ಮಧ್ಯೆ ಸುತ್ತಾಡಿಕೊಂಡು ಬರಲು ಹೋದ.

ತುಂಬ ದೂರ ನಡೆದು ಹೋದ. ಕೊನೆಗೆ ಅವನಿಗೆ ಒಂದು ಪುಟ್ಟ ಮನೆ ಕಾಣಿಸಿತು. ಬಾಗಿಲು ತೆರೆದು ಒಳಗೆ ಹೋದ. ಅಲ್ಲಿ ಮೂಲೆಯಲ್ಲಿ ಒಬ್ಬ ವಿಕಾರವಾದ ಮುದುಕಿ ಕೂತಿದ್ದಳು. ಅವಳಿಗೆ ಒಂದೇ ಒಂದು ಕಣ್ಣು. ಅದೂ ಉಬ್ಬಿ

ಕೊಂಡಿತ್ತು, ಹದ್ದಿನ ಕಣ್ಣಿನಂತೆ ಹೊಳೆಯುತ್ತಿತ್ತು. ಮುದುಕಿ ಒಂದು ಬೀಸುವ ಕಲ್ಲಿನ ಹಿಡಿ ಹಿಡಿದುಕೊಂಡು ತಿರುಗಿಸುತ್ತಿದ್ದಳು. ಅದರ ಕೆಳಗಿನಿಂದ ಸೀಕಡುಬುಗಳೂ ದೋಸೆಗಳೂ ಹಾರಿಕೊಂಡು ಹೊರಕ್ಕೆ ಬರುತ್ತಿದ್ದವು!

ಮುದುಕಿ ನೋಡುವುದಕ್ಕೆ ತುಂಬ ಭಯಂಕರವಾಗಿದ್ದಳು. ಆದರೆ ಅವಳು ಸೀಕಡುಬುಗಳನ್ನೂ ದೋಸೆಗಳನ್ನೂ ತಯಾರಿಸುತ್ತಿದ್ದ ಬಗೆಯನ್ನು ನೋಡಿದರೆ ನಗು ಬರುವಂತಿತ್ತು. ಏಕೆಂದರೆ ಅವು ಗಾಳಿಯಲ್ಲಿ ವ್ಹಿಸ್ ಅಂತ ಶಬ್ದ ಮಾಡಿಕೊಂಡು ಹಾರಿ ಬಂದು ಒಲೆಯ ಬಳಿ ನೆಟ್ಟಗೆ ನಿಂತಿದ್ದ ಮೂಟೆಯೊಳಕ್ಕೆ ಬೀಳುತ್ತಿದ್ದವು!

ಹುಡುಗನಿಗೆ ತುಂಬ ಹಸಿವಾಗಿತ್ತು. ಒಂದು ಕ್ಷಣವೂ ಯೋಚನೆ ಮಾಡುತ್ತ ನಿಲ್ಲದೆ ಅವನು ಮೂಟೆಯನ್ನು ಬೇಗ ಎಳೆದುಕೊಂಡು ಹೆಗಲ ಮೇಲಿರಿಸಿಕೊಂಡು ಓಡಿದ. ತನ್ನ ಮರದ ಕಾಂಡದ ಬಳಿ ಬಂದು ಅದರ ಮೂಲಕ ಕೆಳಗಿಳಿದು ಕ್ಷಣಮಾತ್ರದಲ್ಲಿ ಮನೆಯಲ್ಲಿದ್ದ.

"ನೋಡು ಏನು ತಂದಿದೀನೀಂತ!" ಅಣ್ಣ ತಂಗಿಗೆ ಹೇಳಿದ.

ಮೂಟೆ ತುಂಬ ಸೀಕಡುಬು ದೋಸೆ ಇತ್ತು. ಅವರು ಆಹಾರಕ್ಕಾಗಿ ಈಗ ಹುಡುಕಾಡಬೇಕಾಗಿರಲಿಲ್ಲ. ಆದರೆ ಯಾವುದು ತಾನೆ ಎಷ್ಟು ದಿವಸಾಂತ ಬರುತ್ತೆ. ಕೊನೆಗೆ ಆ ದಿನವೂ ಬಂತು: ಅವರು ಮೂಟೆಯೊಳಕ್ಕೆ ಕೈ ಹಾಕಿದಾಗ ಏನಿದೆ ಅಲ್ಲಿ – ಖಾಲಿ!

ಈಗೇನು ಮಾಡೋದು? ಹಸಿದುಕೊಂಡೇ ಇರಲು ಹೇಗೆ ಆಗುತ್ತೆ? ಹುಡುಗ ಮತ್ತೆ ಕಾಂಡ ಏರಿ ಹೋಗಬೇಕೂಂತ ನಿರ್ಧರಿಸಿದ.

"ನಾನೂ ಬರ್‍ತೀನಿ ಕಣೋ!" ತಂಗಿ ಹೇಳಿದಳು.

"ಬೇಡ ಕಣೇ" ಅಣ್ಣ ಹೇಳಿದ. "ನೀನು ಆ ಮುದುಕೀನ ನೋಡದರೆ ಹೆದರಿಕೊಂಡು ಕಟಾರನೆ ಕಿರುಚಿಕೊಳ್ಳುತ್ತೀಯ. ಇಲ್ದೆ ಇದ್ದರೆ ಆ ಬೀಸುವ ಕಲ್ಲು ನೋಡಿ ಗಟ್ಟಿಯಾಗಿ ನಗ್ತೀಯ. ಆಗ ನಾವು ಸಿಕ್ಕಿ ಬೀಳ್ತೀವಿ."

ತಂಗಿ ಮತ್ತೆ ಕೇಳಿಕೊಂಡಳು:

"ಇಲ್ಲ ಕಣೋ. ನಾನು ಅಳೋದೂ ಇಲ್ಲ, ನಗೋದೂ ಇಲ್ಲ. ನನ್ನೂ ಕರಕೊಂಡು ಹೋಗೋ, ಅಣ್ಣ!"

ಸರಿ, ಅಣ್ಣ ತಂಗಿಯನ್ನೂ ಕರೆದೊಯ್ದ. ಇಬ್ಬರೂ ಕಾಂಡವನ್ನು ಹತ್ತಿ ಹೋದರು. ಆಕಾಶ ತಲುಪಿ ಮೋಡಗಳ ಬಳಿ ನಿಂತರು. ಮೋಡಗಳ ಮಧ್ಯೆ ಹಾದಿ ಕಂಡುಕೊಂಡು ನಡೆದು ಹೋದರು.

ತುಂಬ ಹೊತ್ತು ನಡೆದ ಮೇಲೆ ಆ ಮುದುಕಿಯ ಪುಟ್ಟ ಮನೆ ಸಿಕ್ಕಿತು.

ಒಳಗೆ ಹೋದರು. ವಿಕಾರವಾದ ಮುದುಕಿ ಎಂದಿನಂತೆ ಮೂಲೆಯಲ್ಲಿ ಕೂತು ಬೀಸುವ ಕಲ್ಲು ತಿರುಗಿಸುತ್ತಿದ್ದಳು. ಅವಳಿಗೆ ಒಂದೇ ಒಂದು ಕಣ್ಣು. ಅದೂ ಉಬ್ಬಿಕೊಂಡಿತ್ತು. ಹದ್ದಿನ ಕಣ್ಣಿನಂತೆ ಹೊಳೆಯುತ್ತಿತ್ತು.

"ಓಯ್, ಓಯ್, ನನಗೆ ಭಯವಾಗುತ್ತೆ ಕಣೋ!" ತಂಗಿ ಮೆಲ್ಲಗೆ ಹೇಳಿದಳು.

ಆದರೆ ಅಣ್ಣ ಏನೂ ಹೇಳಲಿಲ್ಲ. ಒಮ್ಮೆ ಮೆಲ್ಲಗೆ ತಿವಿದ ಅಷ್ಟೆ – ಮುದುಕಿ ಕೇಳಿಸಿಕೊಂಡು ಬಿಡ್ತಾಳೆ, ಆಮೇಲೆ ತೊಂದರೆ ಆಗುತ್ತೆ ಅಂತ ಸೂಚಿಸುತ್ತ.

ಮುದುಕಿ ಬೀಸುವ ಕಲ್ಲು ತಿರುಗಿಸುತ್ತಲೇ ಇದ್ದಳು. ಆಶ್ಚರ್ಯವೋ ಆಶ್ಚರ್ಯ – ಸೀಕಡುಬುಗಳೂ ದೋಸೆಗಳೂ ಅದರ ಕೆಳಗಿನಿಂದ ಒಂದಾದ ಮೇಲೊಂದರಂತೆ ಹಾರಿಕೊಂಡು ಬಂದು ಮೂಟೆಯೊಳಕ್ಕೆ ಬೀಳುತ್ತಿದ್ದವು. ಇದು ತಂಗಿಗೆ ಎಷ್ಟು ವಿಚಿತ್ರವಾಗಿ ವಿನೋದವಾಗಿ ಕಂಡುಬಂದಿತೆಂದರೆ, ಅವಳಿಗೆ ತಡೆದುಕೊಳ್ಳಲಾಗದೆ 'ಹಿ-ಹೀ' ಅಂತ ನಕ್ಕಳು.

ಸಣ್ಣದಾಗಿ ಪುಟ್ಟದಾಗಷ್ಟೆ ನಕ್ಕಳು, ಗಟ್ಟಿಯಾಗಲ್ಲ. ಆದರೂ ಅದು ಮುದುಕಿಗೆ ಕೇಳಿಸಿಬಿಟ್ಟಿತು. ತಿರುಗಿ ನೋಡಿ, ಅಣ್ಣನನ್ನೂ ತಂಗಿಯನ್ನೂ ಕಂಡು ಕೂಗಿ ಹೇಳಿದಳು:

"ಆಹ್ಹಾ ! ಸಿಕ್ಕಿಬಿದ್ದಿರಾ ! ನೀವೇನಾ ಹೋದ ಸಾರಿ ನನ್ನೆಲ್ಲ ಸೀಕಡುಬುಗಳನ್ನೂ ದೋಸೆಗಳನ್ನೂ ಕದ್ದುಕೊಂಡು ಹೋದುದು ? !"

ಅಣ್ಣನೂ ತಂಗಿಯೂ ಏನೂ ಹೇಳಲಿಲ್ಲ. ಜೀವ ಇದ್ದವರಂತಲ್ಲ ಸತ್ತವರಂತೆ ನಿಂತಿದ್ದರು.

ಮುದುಕಿ ಒಲೆ ಹೊತ್ತಿಸಿ ಹೇಳಿದಳು:

"ಈಗ ನಿಮ್ಮನ್ನು ಬೇಯಿಸಿ ತಿಂತೀನಿ ! ಮೊದಲು ನೀನು ಬಾ, ಹುಡುಗ. ಬೇಗ ಬಾ. ಈ ಸನಿಕೆ ಮೇಲೆ ಕೂತುಕೋ. ನಿನ್ನನ್ನು ಮೊದಲು ಒಲೆಗೆ ಹಾಕ್ತೀನಿ !"

ಹುಡುಗ ಸನಿಕೆಯ ಮೇಲೆ ಕುಳಿತ. ಆದರೆ ಕಾಲುಗಳನ್ನು ಅಗಲವಾಗಿ ಮುಂದೂಡಿ ಕೈಗಳನ್ನು ಮೇಲೆತ್ತಿಕೊಂಡು ಕುಳಿತ. ಮುದುಕಿಗೆ ಎಷ್ಟು ಪ್ರಯತ್ನಪಟ್ಟರೂ ಅವನನ್ನು ಒಲೆಯೊಳಕ್ಕೆ ಹಾಕಲು ಆಗಲಿಲ್ಲ.

ಮುದುಕಿ ಹೇಳ್ತಾಳೆ:

"ಹಾಗಲ್ಲವೋ ಕೂತುಕೊಳ್ಳೋದು ! ತಲೆಯನ್ನು ಒಲೆಯ ಕಡೆಗೆ ಮಾಡಿಕೊಂಡು ಕೂತುಕೋ."

ಅವನು ಉತ್ತರಿಸುತ್ತಾನೆ:

"ನೀನು ಏನು ಹೇಳ್ತಾ ಇದೀಯೋ ನನಗೆ ತಿಳೀತಾನೇ ಇಲ್ಲ, ಅಜ್ಜಿ ! ನೀನೇ ಕೂತುಕೊಂಡು ಹೇಗೆ ಮಾಡಬೇಕೂಂತ ತೋರಿಸು."

ಮುದುಕಿ ಸನಿಕೆಯ ಮೇಲೆ ಕೂತಳು. ದೇಹವನ್ನು ಸೊಂಟದ ಬಳಿ ಬಾಗಿಸಿ ಎರಡು ಮಡಿಕೆಯಾಗುವಂತೆ ಮಾಡಿಕೊಂಡು, ತಲೆಯನ್ನು ಒಲೆಯ ಕಡೆಗೆ ಒಡ್ಡಿ ಕೂತಳು. ಹುಡುಗ ಕೂಡಲೇ ಅವಳನ್ನು ಒಲೆಯ ಒಳಕ್ಕೆ ದೂಡಿದ !

ಅಣ್ಣನೂ ತಂಗಿಯೂ ಈಗ ಅಪಾಯದಿಂದ ಪಾರಾಗಿದ್ದರು, ಸಂತೋಷಗೊಂಡರು. ಆ ಬೀಸುವ ಕಲ್ಲನ್ನು ತೆಗೆದುಕೊಂಡು ಕಾಂಡದ ಮೂಲಕ ಇಳಿದು ತಮ್ಮ ಮನೆ ಸೇರಿದರು.

ಬೀಸುವ ಕಲ್ಲು ಅವರಿಗೆ ಸೀಕಡುಬನ್ನೂ ದೋಸೆಯನ್ನೂ ಮಾಡಿಕೊಡುತ್ತಿತ್ತು, ಕೆಂಪು ಜುಟ್ಟಿನ ಹುಂಜ ಅವರಿಗೆ ಜೊತೆ ಕೊಡುತ್ತಿತ್ತು. ಅವರು ನಿಶ್ಚಿಂತೆಯಿಂದ ನಿಜಕ್ಕೂ ತುಂಬ ಸಂತೋಷದಿಂದ ಕಾಲ ಕಳೆಯುತ್ತಿದ್ದರು !

ಆದರೆ ಒಂದು ದಿನ ಈ ಮಾಂತ್ರಿಕ ಬೀಸುವ ಕಲ್ಲಿನ ವಿಷಯ ತ್ಸಾರನ ಕಿವಿಗೆ ಬಿತ್ತು. ಅವನು ಸೇವಕರನ್ನು ಅಟ್ಟಿದ. ಅವರು ಬಂದು ಅದನ್ನು ಆ ಮಕ್ಕಳಿಂದ ಕಿತ್ತುಕೊಂಡು ಹೋದರು.

ಬಡಪಾಯಿ ಪುಟ್ಟ ಅನಾಥ ಮಕ್ಕಳಿಗೆ ಮತ್ತೆ ಆಹಾರವೇ ಇಲ್ಲ. ಹಸಿವು ಅವರನ್ನು ಕಾಡತೊಡಗಿತು.

ತಂಗಿ ಅತ್ತಳು, ಅಣ್ಣ ಅತ್ತ. ಹುಂಜ ಅವರ ಅಳುವನ್ನು ಕೇಳಿಸಿಕೊಂಡಿತು. ಅವರ ಬಳಿಗೆ ಹೋಗಿ ಹೇಳಿತು:

"ಕೊ-ಕ್ಕೋ-ಕ್ಕೋ ! ನಾನು ಬೀಸುವ ಕಲ್ಲನ್ನು ತ್ಸಾರನಿಂದ ವಾಪಸು ತರ್ತೀನಿ !"

ಅದು ತ್ಸಾರನನ್ನು ಕಾಣಲು ಹೊರಟಿತು.

ತುಂಬ ದೂರ ಹೋಯಿತು. ದಾರಿಯಲ್ಲಿ ಅದಕ್ಕೆ ಒಂದು ಕರಡಿ ಸಿಕ್ಕಿತು.

"ಎಲ್ಲಿಗೆ ಹೊರಟೆ, ಹುಂಜ ?" ಕರಡಿ ಕೇಳಿತು.

"ತ್ಸಾರನ ಬಳಿಗೆ. ಬೀಸುವ ಕಲ್ಲು ತರೋಕೆ. ಅವನು ಅದನ್ನು ನಮ್ಮ ಪುಟ್ಟ ಅನಾಥ ಮಕ್ಕಳಿಂದ ಕಿತ್ತುಕೊಂಡಿದ್ದಾನೆ."

"ನಾನೂ ನಿಂಜೊತೆ ಬರಲಾ ?"

"ಬಾ. ಅದಕ್ಕೇನಂತೆ. ನನ್ನ ಬಲಗಡೆ ರೆಕ್ಕೆ ಕೆಳಗೆ ಸೇರಿಕೋ."

ಕರಡಿ ಹುಂಜದ ಬಲರೆಕ್ಕೆ ಕೆಳಗೆ ಸೇರಿಕೊಂಡಿತು. ಹುಂಜ ಮತ್ತೆ ತನ್ನ ದಾರಿ ಹಿಡಿಯಿತು.

ತುಂಬ ದೂರ ಹೋಯಿತು. ಆಗ ಅದಕ್ಕೆ ಒಂದು ತೋಳ ಸಿಕ್ಕಿತು.

"ಎಲ್ಲಿಗೆ ಹೊರಟೆ, ಹುಂಜ ?" ತೋಳ ಕೇಳಿತು.

"ತ್ಸಾರನ ಬಳಿಗೆ. ಬೀಸುವ ಕಲ್ಲು ತರೋಕೆ. ಅವನು ಅದನ್ನು ನಮ್ಮ ಪುಟ್ಟ ಅನಾಥ ಮಕ್ಕಳಿಂದ ಕಿತ್ತು ಕೊಂಡಿದಾನೆ."

"ನನ್ನೂ ನಿಂಜೊತೆ ಕರಕೊಂಡು ಹೋಗ್ತೀಯ, ಹುಂಜ!" ತೋಳ ಕೇಳಿತು.

"ಆಗಲಿ. ನನ್ನ ಎಡಗಡೆ ರೆಕ್ಕೆ ಕೆಳಗೆ ಸೇರಿಕೋ."

ತೋಳ ಹುಂಜದ ಎಡರೆಕ್ಕೆ ಕೆಳಗೆ ಸೇರಿಕೊಂಡಿತು. ಹುಂಜ ಮುಂದಕ್ಕೆ ಹೋಯಿತು. ದಾರಿಯಲ್ಲಿ ಅದಕ್ಕೆ ಒಂದು ಪುಟ್ಟ ಕೊಳ ಸಿಕ್ಕಿತು.

"ಎಲ್ಲಿಗೆ ಹೊರಟೆ, ಹುಂಜ?" ಕೊಳ ಕೇಳುತ್ತೆ.

"ತ್ಸಾರನ ಬಳಿಗೆ. ಬೀಸುವ ಕಲ್ಲು ತರಲು. ಅವನು ಅದನ್ನು ನಮ್ಮ ಪುಟ್ಟ ಅನಾಥ ಮಕ್ಕಳಿಂದ ಕಿತ್ತು ಕೊಂಡಿದಾನೆ."

"ನನ್ನೂ ನಿಂಜೊತೆ ಕರಕೊಂಡು ಹೋಗ್ತೀಯಾ, ಹುಂಜ?" ಕೊಳ ಕೇಳಿತು.

"ಆಗಲಿ!" ಹುಂಜ ಹೇಳಿತು. "ನೀನು ನನ್ನ ಗಂಟಲಿನ ಆಹಾರದ ಚೀಲಕ್ಕೆ ಸರಿಯಾಗಿ ಹೊಂದುತೀಯ."

ಹುಂಜ ಕೊಳದ ನೀರನ್ನೆಲ್ಲ ಕುಡಿಯಿತು. ಮುಂದಕ್ಕೆ ಹೋಯಿತು.

ಕೊನೆಗೆ ಅದು ತ್ಸಾರನ ಅರಮನೆಯನ್ನು ತಲುಪಿತು. ಅಲ್ಲಿ ಅವನ ಮಲಗುವ ಕೋಣೆಯ ಕಿಟಕಿಯ ಮೇಲೆ ಕುಳಿತು ಕೂಗಿ ಹೇಳಿತು:

"ನನಗೆ – ಹುಂಜಕ್ಕೆ – ಕೆಂಪು ಜುಟ್ಟಿದೆ. ಆದರೆ ದುಷ್ಟ ತ್ಸಾರನಿಗೆ ಏನೂ ಇಲ್ಲ! ಅವನು ಇಬ್ಬರು ಪುಟ್ಟ ಅನಾಥ ಮಕ್ಕಳಿಂದ ಬೀಸುವ ಕಲ್ಲನ್ನು ಕಿತ್ತುಕೊಂಡು ಬಂದಿದಾನೆ. ತಾನು ಚೊಕ್ಕ ಭೋಜನ ಮಾಡುತ್ತಿದ್ದರೆ, ಅಲ್ಲಿ ಆ ಅನಾಥ ಮಕ್ಕಳು ಉಪವಾಸ ಇದಾರೆ."

ತ್ಸಾರನಿಗೆ ತುಂಬ ಕೋಪ ಬಂತು. ಹುಂಜವನ್ನು ಓಡಿಸುವಂತೆ ಸೇವಕರಿಗೆ ಹೇಳಿದ. ಆದರೆ ಹುಂಜ ಅವರ ಕೈಗೆ ಸಿಗದೆ ಹಾರಿ ಮೇಲೆ ಕುಳಿತು ಮತ್ತೆ ಕೂಗಿ ಹೇಳಿತು:

"ನನಗೆ – ಹುಂಜಕ್ಕೆ – ಕೆಂಪು ಜುಟ್ಟಿದೆ. ಆದರೆ ದುಷ್ಟ ತ್ಸಾರನಿಗೆ ಏನೂ ಇಲ್ಲ! ಅವನು ಇಬ್ಬರು ಪುಟ್ಟ ಅನಾಥ ಮಕ್ಕಳಿಂದ ಅವರ ಬೀಸುವ ಕಲ್ಲನ್ನು ಕಿತ್ತುಕೊಂಡು ಬಂದಿದಾನೆ. ತಾನು ಚೊಕ್ಕ ಭೋಜನ ಮಾಡುತ್ತಿದ್ದರೆ, ಅಲ್ಲಿ ಆ ಅನಾಥ ಮಕ್ಕಳು ಉಪವಾಸ ಇದಾರೆ."

ಹುಂಜವನ್ನು ಹಿಡಿದು ಕುದುರೆ ಲಾಯಕ್ಕೆ ದಬ್ಬಿ, ಹುಚ್ಚು ಕುದುರೆಗಳು ಅದನ್ನು ತುಳಿದು ಸಾಯಿಸಲಿ, ಅಂತ ತ್ಸಾರನು ಸೇವಕರಿಗೆ ಆಜ್ಞಾಪಿಸಿದ. ಸೇವಕರು ಹುಂಜವನ್ನು ಹಿಡಿದರು, ಲಾಯದೊಳಕ್ಕೆ ದಬ್ಬಿದರು. ಹುಂಜವು ತನ್ನ ಬಲ ರೆಕ್ಕೆಯ ಕೆಳಗಿದ್ದ ಕರಡಿಯನ್ನು ಹೊರಕ್ಕೆ ಬಿಟ್ಟಿತು. ಅದು ಕುದುರೆಗಳನ್ನೆಲ್ಲ ಕೊಂದು ಹಾಕಿತು.

ಮಾರನೆಯ ದಿನ ಬೆಳಿಗ್ಗೆ ಸೇವಕರು ಕುದುರೆ ಲಾಯಕ್ಕೆ ಬಂದು ಬಾಗಿಲು ತೆರೆದರೋ ಇಲ್ಲವೋ, ಹುಂಜ ಬೇಗನೆ ಹೊರಬಂದು ತ್ಸಾರನ ಮಲಗುವ ಕೋಣೆಯ ಕಿಟಕಿಯ ಬಳಿ ಹೋಗಿ ಮತ್ತೆ ಕೂಗಿ ಹೇಳತೊಡಗಿತು:

"ನನಗೆ – ಹುಂಜಕ್ಕೆ – ಕೆಂಪು ಜುಟ್ಟಿದೆ. ಆದರೆ ದುಷ್ಟ ತ್ಸಾರನಿಗೆ ಏನೂ ಇಲ್ಲ! ಅವನು ಇಬ್ಬರು ಪುಟ್ಟ ಅನಾಥ ಮಕ್ಕಳಿಂದ ಅವರ ಬೀಸುವ ಕಲ್ಲನ್ನು ಕಿತ್ತುಕೊಂಡು ಬಂದಿದಾನೆ. ತಾನು ಚೊಕ್ಕ ಭೋಜನ ಮಾಡುತ್ತಿದ್ದರೆ, ಅಲ್ಲಿ ಆ ಅನಾಥ ಮಕ್ಕಳು ಉಪವಾಸ ಇದಾರೆ."

ಅದನ್ನು ಕೇಳಿ ತ್ಸಾರನಿಗೆ ವಿಪರೀತ ಕೋಪ ಬಂತು. ಆ ಹುಂಜವನ್ನು ಹಿಡಿದು ಕುರಿ ದೊಡ್ಡಿಗೆ ತಳ್ಳಿ, ಅಲ್ಲಿ ಉನ್ಮತ್ತ ಟಗರುಗಳು ಅದನ್ನು ಕೊಂಬುಗಳಿಂದ ತಿವಿದು ಕೊಲ್ಲಲಿ, ಅಂತ ಸೇವಕರಿಗೆ ಆಜ್ಞಾಪಿಸಿದ.

ಸೇವಕರು ತ್ಸಾರ್ ಹೇಳಿದಂತೆಯೇ ಮಾಡಿದರು. ಆದರೆ ಹುಂಜಕ್ಕೆ ಹೆದರಿಕೆಯೇನೂ ಆಗಲಿಲ್ಲ. ಅದು ತೋಳ ವನ್ನು ತನ್ನ ಎಡ ರೆಕ್ಕೆಯ ಕೆಳಗಿನಿಂದ ಹೊರಬಿಟ್ಟಿತು. ತೋಳ ಟಗರುಗಳನ್ನೆಲ್ಲ ಕೊಂದಿತು.

ಮಾರನೆಯ ದಿನ ಬೆಳಿಗ್ಗೆ ತ್ಸಾರನ ಸೇವಕರು ನೋಡಲು ಬಂದರು. ಆದರೆ ನೋಡುವುದೇನಿದೆ – ಹುಂಜ ಹೊರಕ್ಕೆ ಬಂತು, ತ್ಸಾರನ ಅರಮನೆಗೆ ಹಾರಿ ಹೋಗಿ ಅವನ ಮಲಗುವ ಕೋಣೆಯ ಕಿಟಕಿಯ ಬಳಿ ಕುಳಿತು ಕೂಗಿ ಹೇಳ ತೊಡಗಿತು:

"ನನಗೆ – ಹುಂಜಕ್ಕೆ – ಕೆಂಪು ಜುಟ್ಟಿದೆ. ಆದರೆ ದುಷ್ಟ ತ್ಸಾರನಿಗೆ ಏನೂ ಇಲ್ಲ! ಅವನು ಇಬ್ಬರು ಪುಟ್ಟ ಅನಾಥ ಮಕ್ಕಳಿಂದ ಅವರ ಬೀಸುವ ಕಲ್ಲನು ಕಿತ್ತುಕೊಂಡು ಬಂದಿದಾನೆ. ತಾನು ಚೊಕ್ಕ ಭೋಜನ ಮಾಡುತ್ತಿದ್ದರೆ, ಅಲ್ಲಿ ಆ ಅನಾಥ ಮಕ್ಕಳು ಉಪವಾಸ ಇದಾರೆ."

ಅದನ್ನು ಕೇಳಿ ತ್ಸಾರನಿಗೆ ವಿಪರೀತ ಕೋಪ ಬಂತು. ಕೋಪದಿಂದ ಅವನ ಮೈ ನಡುಗಿತು. ತನ್ನ ಕೈಲಿ ಏನೂ ಮಾಡಲಾಗುತ್ತಿಲ್ಲವಲ್ಲ ಎಂದೂ ಅವನಿಗೆ ಸಿಟ್ಟು ಬಂತು. ಹುಂಜವನ್ನು ಹೇಗೆ ನಾಶಮಾಡುವುದು ಅನ್ನೋದೇ ಅವನಿಗೆ ಗೊತ್ತಾಗಲಿಲ್ಲ.

ಅವನು ತನ್ನ ಸೇವಕರನ್ನು ಕರೆದ. ತನ್ನ ಕಬ್ಬಿಣದ ಸ್ನಾನದ ಕೋಣೆಯನ್ನು ಕೆಂಪಗಾಗುವವರೆಗೂ ಕಾಯಿಸು ವಂತೆ ಹೇಳಿದ. ಅದರಲ್ಲಿ ಹುಂಜವನ್ನು ಎಸೆದು ಸಾಯುವವರೆಗೂ ಬೇಯಿಸುವಂತೆ ಆಜ್ಞಾಪಿಸಿದ.

ಸೇವಕರು ಹುಂಜವನ್ನು ಕೆಂಪಗೆ ಕಾದ ಕಬ್ಬಿಣದ ಸ್ನಾನದ ಕೋಣೆಯೊಳಕ್ಕೆ ಎಸೆದರು. ಆದರೆ ಹುಂಜ ತನ್ನ ಗಂಟಲಿನ ಆಹಾರದ ಚೀಲದಲ್ಲಿ ತುಂಬಿಕೊಂಡಿದ್ದ ನೀರನ್ನೆಲ್ಲ ಹೊರಕ್ಕೆ ಬಿಟ್ಟಿತು. ಸ್ನಾನದ ಕೋಣೆ ನೀರಿನಿಂದ ತುಂಬಿ ತಣ್ಣಗಾಯಿತು.

ಮಾರನೆಯ ದಿನ ಬೆಳಿಗ್ಗೆ ತ್ಸಾರನ ಸೇವಕರು ಸ್ನಾನದ ಕೋಣೆಗೆ ಬಂದು ಬಾಗಿಲು ತೆರೆದರು. ಹುಂಜ ಹೊರ ಬಂತು. ತ್ಸಾರನ ಅರಮನೆಗೆ ಹೋಗಿ, ಅವನ ಮಲಗುವ ಕೋಣೆಯ ಕಿಟಕಿಯ ಬಳಿ ಕುಳಿತು, ಕೂಗಿ ಹೇಳ ತೊಡಗಿತು:

"ನನಗೆ – ಹುಂಜಕ್ಕೆ – ಕೆಂಪು ಜುಟ್ಟಿದೆ. ಆದರೆ ದುಷ್ಟ ತ್ಸಾರನಿಗೆ ಏನೂ ಇಲ್ಲ! ಅವನು ಇಬ್ಬರು ಪುಟ್ಟ ಅನಾಥ ಮಕ್ಕಳಿಂದ ಅವರ ಬೀಸುವ ಕಲ್ಲನ್ನು ಕಿತ್ತುಕೊಂಡು ಬಂದಿದಾನೆ. ತಾನೇ ಚೊಕ್ಕ ಭೋಜನ ಮಾಡುತ್ತಿದ್ದರೆ, ಅಲ್ಲಿ ಆ ಅನಾಥ ಮಕ್ಕಳು ಉಪವಾಸ ಇದಾರೆ."

ತ್ಸಾರನ ತಲೆ ತಿರುಗತೊಡಗುತ್ತೆ. ಅವನು ಇನ್ನೂ ಏನು ಯೋಚನೆ ಮಾಡುತ್ತಾ ಇದಾನೆ? ಹುಂಜವನ್ನು ಹಿಡಿದು ಕೊಂದು ಬೇಯಿಸಿ ತನ್ನ ಬೆಳಗಿನ ಉಪಾಹಾರಕ್ಕೆ ಅದನ್ನು ಬಡಿಸಬೇಕೂಂತ ಆಜ್ಞಾಪಿಸಿದ. ಆದರೆ ಅವನ ಕೋಪ ಎಷ್ಟು ಮಿತಿಮೀರಿತ್ತೆಂದರೆ, ಅದನ್ನು ಕೊಂದು ಬೇಯಿಸಿ ಬಡಿಸುವವರೆಗೂ ಅವನು ತಡೆಯದಾದ. ತಾನೇ ಹುಂಜವನ್ನು ಹಿಡಿದು, ಜೀವಂತವಾಗಿದ್ದಾಗಲೇ ಅದನ್ನು ಇಡೀಯಾಗಿ ನುಂಗಿದ!

ಹುಂಜ ತ್ಸಾರನ ಹೊಟ್ಟೆಯ ಒಳಗಿನಿಂದಲೇ ಕೂಗತೊಡಗಿತು:

"ನನಗೆ – ಹುಂಜಕ್ಕೆ – ಕೆಂಪು ಜುಟ್ಟಿದೆ. ಆದರೆ ಈ ದುಷ್ಟ ತ್ಸಾರನಿಗೆ ಏನೂ ಇಲ್ಲ! ಅವನು ಇಬ್ಬರು ಪುಟ್ಟ ಅನಾಥ ಮಕ್ಕಳಿಂದ ಅವರ ಬೀಸುವ ಕಲ್ಲನ್ನು ಕಿತ್ತುಕೊಂಡು ಬಂದಿದಾನೆ. ತಾನೇ ಚೊಕ್ಕ ಭೋಜನ ಮಾಡುತ್ತಿದ್ದರೆ, ಅಲ್ಲಿ ಆ ಅನಾಥ ಮಕ್ಕಳು ಉಪವಾಸ ಇದಾರೆ."

ತ್ಸಾರನು ಹುಂಜವನ್ನು ಬೇಡಿಕೊಂಡ:

"ಹೊರಗೆ ಬಾ" ಅವನು ಹೇಳ್ತಾನೆ. "ಹೊರಗೆ ಬಾ, ಪುಟ್ಟ ಹುಂಜ. ನನ್ನನ್ನು ಶಾಂತಿಯಿಂದಿರಲು ಬಿಡು. ನಿನ್ನನ್ನು ಮತ್ತೆ ಮುಟ್ಟೋದಿಲ್ಲ. ನಾನು ಮಾತು ಕೊಡ್ತೀನಿ!"

ಹುಂಜ ಅವನಿಗೆ ಉತ್ತರ ಹೇಳುತ್ತೆ:

"ಇಲ್ಲ, ಬರೊಲ್ಲ. ಬೀಸುವ ಕಲ್ಲನ್ನು ನೀನು ಆ ಪುಟ್ಟ ಅನಾಥ ಮಕ್ಕಳಿಗೆ ಹಿಂದಿರುಗಿಸುವವರೆಗೂ ನಾನು ಹೊರಕ್ಕೆ ಬರೊಲ್ಲ."

ಅದು ಮತ್ತೆ ಕೂಗಿ ಹೇಳತೊಡಗಿತು:

"ನನಗೆ – ಹುಂಜಕ್ಕೆ – ಕಂಪು ಜುಟ್ಟಿದೆ. ಆದರೆ ಈ ದುಷ್ಟ ತ್ಸಾರನಿಗೆ ಏನೂ ಇಲ್ಲ! ಅವನು ಇಬ್ಬರು ಪುಟ್ಟ ಅನಾಥ ಮಕ್ಕಳಿಂದ ಅವರ ಬೀಸುವ ಕಲ್ಲನ್ನು ಕಿತ್ತುಕೊಂಡು ಬಂದಿದಾನೆ. ತಾನೇ ಚೊಕ್ಕ ಭೋಜನ ಮಾಡುತ್ತಿದ್ದರೆ, ಅಲ್ಲಿ ಆ ಅನಾಥ ಮಕ್ಕಳು ಉಪವಾಸ ಇದಾರೆ."

ಜನ ನಿಂತು ಕೇಳುತ್ತಾರೆ, ದುಷ್ಟ ತ್ಸಾರನ ಸ್ಥಿತಿಯನ್ನು ಕಂಡು ನಗುತ್ತಾರೆ. ಈಗ ಏನೂ ಮಾಡುವ ಹಾಗಿಲ್ಲ. ದುಷ್ಟ ತ್ಸಾರ್ ಬೀಸುವ ಕಲ್ಲನ್ನು ಆ ಅನಾಥ ಮಕ್ಕಳಿಗೇ ಹಿಂದಿರುಗಿಸಿದ. ಹುಂಜ ತ್ಸಾರನ ಹೊಟ್ಟೆಯಿಂದ ಹೊರಕ್ಕೆ ಹಾರಿ ಮನೆಯ ಕಡೆಗೆ ಓಡಿತು.

ಹುಂಜವನ್ನು ಕಂಡು ಅಣ್ಣನಿಗೂ ತಂಗಿಗೂ ತುಂಬ ಸಂತೋಷವಾಯಿತು. ಅಂದಿನಿಂದಾಚೆಗೆ ಅವರು ಮೂವರೂ ಒಟ್ಟಿಗೇ ಸುಖವಾಗಿದ್ದರು. ಬೀಸುವ ಕಲ್ಲು ಎಷ್ಟೊಂದು ಸೀಕಡುಬುಗಳನ್ನೂ ದೋಸೆಗಳನ್ನೂ ನೀಡುತ್ತಿದ್ದಿತೆಂದರೆ ಅವರು ಎಂದೂ ಉಪವಾಸ ಬೀಳಬೇಕಾಗಲಿಲ್ಲ. ಅವರ ಬಳಿ ಯಾವತ್ತೂ ತಮಗೆ ಬೇಕಾದುದಕ್ಕಿಂತ ಹೆಚ್ಚು ಇರುತ್ತಲೇ ಇತ್ತು. ಅವರು ಅದನ್ನು ತಮ್ಮಂತೆಯೇ ಬಡವರಾಗಿದ್ದ ಇತರ ಜನರ ಮಧ್ಯೆಯೂ ಹಂಚುತ್ತಿದ್ದರು.



